ಓಂ

॥ ಶ್ರೀ ಮಂಜುನಾಥ ಪ್ರಸನ್ನಃ ॥

# ಶ್ರೀ ಮಂಜುನಾಥಸ್ವಾಮಿ ಭಜನಾವಳಿ



ಶ್ರೀ ಮಂಜುನಾಥಸ್ವಾಮಿ ದೇವಾಲಯ.

ಶ್ರೀ ಮಂಜುನಾಥಸ್ವಾಮಿ, ಶ್ರೀ ಚಂದ್ರನಾಥಸ್ವಾಮಿ, ಶ್ರೀ ಅಣ್ಣಪ್ಪಸ್ವಾಮಿ, ಕ್ಷೇತ್ರಮಹಿಮೆ ಇತ್ಯಾದಿ ಭಜನೆಗಳು.

ಭಜನಾ ಕವಿ

ಶ್ರೀ ಸ್ವಾಮಿಸೇವಾಸಕ್ತ—ಧರ್ಮಸ್ಥಳ ದ. ಕ.

ಬೆಲೆ: 25 ನ.ಪೈಸೆ 0—4—0

ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಮಂಗಳೂರು

## ದೇವಸ್ಥಾನದ ವಿಶೇಷ ಉತ್ಸವಗಳು

### ೧. ದೀಪೋತ್ಸವ

ಪ್ರತಿವರ್ಷವೂ ಕಾರ್ತಿಕ ಬಹುಳ ದಶಮಿಯಿಂದ ಅಮಾವಾಸೆಯ್ಯ ವರೇಗೆ ೫ ದಿವಸಗಳಲ್ಲಿ ಲಕ್ಷದೀಪೋತ್ಸವವು ಬಹಳ ವಿಜೃಂಭಣೆಯಿಂದ ಜರಗುವುದು. ಕೊನೆಯ ೨ ದಿವಸಗಳಲ್ಲಿ ಸಂಜೆ ಸರ್ವಧರ್ಮ ಸಮ್ಮೇಲನವೂ ಸಾಹಿತ್ಯಗೋಷ್ಠಿಯೂ ನಡೆಯುವುದು.

### ೨. ಕಾಲಾವಧಿ ಜಾತ್ರೆ

ಪ್ರತಿ ವರ್ಷವೂ ಮೇಷ ಸಂಕ್ರಮಣ ದಿವಸ ಧ್ವಜಾರೋಹಣವಾಗಿ, ಧರ್ಮದೇವತೆಗಳಿಗೆ ಪೂಜೋತ್ಸವಗಳೂ, ಶ್ರೀ ಸ್ವಾಮಿಗೆ ರಥೋತ್ಸವವೂ ಇತರ ದೇವತಾವಿನಿಯೋಗಾದಿಗಳೂ ೯ ದಿವಸದ ವರೇಗೆ ನಡೆಯುವುದು.

### ೩. ನವರಾತ್ರಿ ಉತ್ಸವ

ಪ್ರತಿ ವರ್ಷವೂ ನವರಾತ್ರಿಯಲ್ಲಿ ಅಮ್ಮನವರಿಗೆ ಉತ್ಸವ, ಬ್ರಾಹ್ಮಣ ಸಂತರ್ಪಣೆ, ಮತ್ತು ಕೊನೆಯ ದಿನ ಬ್ರಾಹ್ಮಣ ಮುತ್ತೈದೆಯರಿಗೆ ಶೀರೆಗಳು ಧರ್ಮವಾಗಿ ಕೊಡಲ್ಪಡುವವು.

### ೪. ಶಿವರಾತ್ರಿ ಉತ್ಸವ

ಶಿವರಾತ್ರಿಯಲ್ಲಿ ಶ್ರೀ ಸ್ವಾಮಿಗೆ ರಥೋತ್ಸವವೂ ಶಿವರಾತ್ರಿ ಬೆಟ್ಟಕ್ಕೆ ಶ್ರೀ ಸ್ವಾಮಿಯನ್ನು ಕೊಂಡುಹೋಗಿ ಪೂಜೆಯೂ ನಡೆಯುತ್ತದೆ.

### ೫. ಪತ್ತನಾವಧಿ ಜಾತ್ರೆ (ಪತ್ತನಾಜೆ)

ವೃಷಭಮಾಸ, ಹತ್ತರಲ್ಲಿ ಧ್ವಜಸ್ತಂಭವನ್ನು ಇಳಿಸುವುದೂ, ಶ್ರೀ ಸ್ವಾಮಿಗೆ ಉತ್ಸವ, ಪೂಜೆ, ಆರಾಧನೆಗಳೂ ನಡೆಯುವವು.

ವರ್ಷದಲ್ಲಿ ಎರಡು ಸಲ ದೈವಗಳಿಗೆ ನಡಾವಳಿ ಇದೆ.

---

## ಯಾತ್ರಿಕರಿಗೆ ಸೂಚನೆ

ಶ್ರೀ ಧರ್ಮಸ್ಥಳ ಮಂಜುನಾಥ ಸ್ವಾಮಿಯ ಹರಿಕೆ ಕಾಣಿಕೆ ವಸೂಲಿಗಾಗಿ ಯಾರನ್ನೂ ಕಳುಹಿಸುವ ಪದ್ಧತಿಯಿಲ್ಲ. ಶ್ರೀ ಸ್ವಾಮಿಯ ಹರಿಕೆ, ಕಾಣಿಕೆ ಇನ್ನೊಬ್ಬರ ಅಥವಾ ಇನ್ನೊಂದು ಸ್ಥಳದಲ್ಲಿ ಕೊಟ್ಟರೆ ಶ್ರೀ ಸ್ವಾಮಿಯ ಹರಿಕೆ ಸಲ್ಲಿಸಿದಂತೆ ಆಗುವುದಿಲ್ಲ. ಸ್ವತಹಾ ನೀವು ಬಂದಾಗ ಅಥವಾ M. O. ಮೂಲಕ ರವಾನಿಸಬಹುದು. ಯಾರಿಗೂ ಸಾಲಕೊಡುವ ಪದ್ಧತಿಯಿಲ್ಲ. ಕ್ಷೇತ್ರದ ಯಾವದೇ ಕೆಲಸಕ್ಕಾಗಿ ಯಾರಿಂದಲೂ ಸಹಾಯ ಕೇಳುವುದಿಲ್ಲ. ನಾನಾವಿಧ ಜನರನ್ನು ನಂಬಿಸಿ, ಮೋಸಪಡಿಸುವವರನ್ನು ಸರಕಾರದ ಕೈಗೆಕೊಟ್ಟು ತಕ್ಕ ಶಿಕ್ಷೆಗೆ ಗುರಿಪಡಿಸುವುದೂ ಶ್ರೀ ಸ್ವಾಮಿಯ ಸೇವೆಯೇ ಆಗುವುದು.

ಡಿ. ರತ್ನವರ್ಮ ಹೆಗ್ಗಡೆ,
ಧರ್ಮಸ್ಥಳ, ದ. ಕ.



ಶ್ರೀ ರತ್ನವರ್ಮ ಹೆಗ್ಗಡೆಯವರು



ಶ್ರೀ ಮಂಜಯ್ಯ ಹೆಗ್ಗಡೆಯವರು



ನೆಲ್ಯಾಡಿ ಬೀಡು



ಶ್ರೀ ಚಂದ್ರನಾಥಸ್ವಾಮಿ ಬಸದಿ



## ॥ ಶ್ರೀ ಮಂಜುನಾಥ ಸ್ತುತಿ ॥ (ಬೇಗಡೆ ಅಷ್ಟತಾಳ)

ಭಜಿಸಿ ನಿನ್ನನು ನಿತ್ಯಧ್ಯಾನಿಸುವೇ । ಶ್ರೀ ಮಂಜುನಾಥನೆ ॥
ಭಜನೆಯಲಿ ಸಾನಿನ್ನ ಪೂಜಿಸುವೇ ॥ ಪಲ್ಲ ॥
ತ್ರಿಜಗದೊಡೆಯನೆ ನಿನ್ನ ಪಾದವ । ಭಜಿಸಿ ಪೂಜಿಸಿ ನಂಬಿ ನಡೆಯುವ ॥
ಸುಜನರೆಲ್ಲರ ಮನದಭೀಷ್ಟವ । ಭುಜಗಭೂಷಣನಿತ್ತು ಪಾಲಿಸು ॥ಅ.ಪ॥
ಧರ್ಮಸ್ಥಳ ಕ್ಷೇತ್ರದಲಿ ನೆಲಸಿರುವೇ । ಶ್ರೀ ಮಂಜುನಾಥನೆ ॥
ಧರ್ಮಕರ್ಮದ ಕಾರ್ಯಕಾರಣನೇ ॥
ನಿರ್ಮಲದ ಹೃದಯದಲಿ ನಿನ್ನನು । ನೆಮ್ಮದಿಯೊಳನವರತ ನೆನೆವರ ।
ಕರ್ಮಕವಚವ ಕಳೆದು ಮುಕ್ತಿಯ । ಒಮ್ಮನದಿನೀಡುವ
ಮಹಾತ್ಮನೆ ॥ ೧ ॥

ಧರ್ಮದೇವತೆಗಳಿಗೆನೆಲೆವೀಡೂ । ಶ್ರೀ ಮಂಜುನಾಥನೆ ॥
ಧರ್ಮಕಾರ್ಯವು ನಡೆವಸಿರಿನಾಡೂ ॥
ಧರ್ಮಸಮ್ಮೇಲನವ ನಡೆಸುತ । ಧರ್ಮಮರ್ಮವಬೋಧಿಸುತ್ತಿಹ ॥
ಧರ್ಮಸ್ಥಳದಧಿಕಾರಿಯಹ ರತ್ನ-ವರ್ಮ ಹೆಗ್ಗಡೆಯರನು ಹರಸುವ॥ ೨॥
ಶರಣಜನ ಸುರಧೇನು ನೀನೆಂದೂ । ಶ್ರೀ ಮಂಜುನಾಥನೆ ॥
ಧರೆಯೊಳೆಲ್ಲರು ತಿಳಿದಿರುವರಿಂದೂ ॥
ನಿರತ ನಿನ್ನಯ ಪಾದಸೇವೆಗೆ । ನೆರೆವ ಭಕ್ತರ ವಿವಿಧ ಕಷ್ಟವ ॥
ಪರಿಹರಿಸಿ ಸಂರಕ್ಷಿಸುವ ಪುರ । ಹರನೆ ಸತತವು ಪಾಲಿಸೆನ್ನನು ॥ ೩ ॥
ತಾಯಿ ತಂದೆಯು ನೀನೆ ಪ್ರಭುವರನೇ । ಶ್ರೀ ಮಂಜುನಾಥನೆ ॥
ಆಯತದ ಗುರು, ಬಂಧುಜನ ನೀನೇ ॥
ಮಾಯೆ ತುಂಬಿದ ಲೋಕವಿದರನ್ಯಾಯ ನ್ಯಾಯವನರಿತು ಕಷ್ಟದಿ ।
ಬಾಯಿಬಿಡುತಿಹ ಭಕ್ತನನು ನಿಜ । ತಾಯಿಯಂದದಿ ಪಾಲಿಸನುದಿನ ॥ ೪ ॥
ಮಂಜುಳಾಂಗನೆ ಮನ್ಮಥಾಂಕನೇ । ಶ್ರೀ ಮಂಜುನಾಥನೆ ॥
ಮಂಜು ತುಂಬಿದ ಪರ್ವತಾಧಿಪನೇ ।
ಕಂಜರಿಪುಧರ ಕರುಣಸಾಗರ । ನಂಜುಗೊರಳನೆ.ದುರಿತದೂರನೆ ॥
ರಂಜಿಸುವ ಸೌಂದರ್ಶನದಿ ಭವ । ಭಂಜನೆಯಗೈದೆನ್ನಪಾಲಿಸು ॥ ೫ ॥

ನಿತ್ಯಭಕ್ತರ ಸೇವೆಗಳ ಪಡೆದು । ಶ್ರೀ ಮಂಜುನಾಥನೆ ॥
ಭಕ್ತಿಯುಕ್ತದ ಹರಿಕೆಗಳನೊಲಿದು ॥
ಅರ್ಥಿಯಲಿ ಸ್ವೀಕರಿಸಿ ಶರಣರ । ಸತ್ಯಧರ್ಮದವಾಂಛಿತಾರ್ಥವ ॥
ನಿತ್ತುಹರಸುತಪೊರೆವ ಮುನಿಜನ । ಸ್ತುತ್ಯಪಾಲಿಸುಕೃತ್ತಿವಾಸನೆ ॥ ೬ ॥
ಕಾಯವಿದುಸ್ಥಿರವಲ್ಲವೈದೊರೆಯೇ । ಶ್ರೀ ಮಂಜುನಾಥನೆ ॥
ನ್ಯಾಯವಾದಗಳೇತಕೆಂದರಿಯೇ ॥
ದಾಯವಾದದ ದೂರು ಕಲಹದ । ಮಾಯೆವಂಚನೆ, ಕಳವು, ಹುಸಿಗಳ ।
ನ್ಯಾಯದಲಿ ತೀರಿಸುತ ಭಕ್ತರ । ಕಾಯುತಿಹ ಕರುಣಾಳು ರಕ್ಷಿಸು ॥ ೭ ॥
ನೇತ್ರವತಿಯಲಿ ಸ್ನಾನವನು ಗೈದು । ಶ್ರೀ ಮಂಜುನಾಥನೆ ॥
ಭಕ್ತಿಯಲಿ ತವಸನ್ನಿಧಿಗೆ ಬಂದೂ ॥
ಪ್ರಸ್ತುತದ ಪಂಚಾಮೃತದ ಸುಪ । ವಿತ್ರದಭಿಷೇಕವನು ಮಾಡಿಸಿ ॥
ಶಕ್ತಿಯುಕ್ತದ ಹರಿಕೆ ಕಾಣಿಕೆ । ಯಿತ್ತು ಪಡೆದೆನುಗಂಧ ತೀರ್ಥವ ॥ ೮ ॥
ಹಣ್ಣುಕಾಯಿಯ ಸೇವೆಯೊಪ್ಪಿಸುವೇ । ಶ್ರೀ ಮಂಜುನಾಥನೆ ॥
ನಿನ್ನ ವಿಧವಿಧಸೇವೆಯರ್ಪಿಸುವೇ ॥
ಕನ್ಯಕಾಪರಮೇಶ್ವರಿಗೆ, ಮಹಿಮೋನ್ನತದ ಗಣಪತಿಗೆ, ಭಕ್ತರ ।
ಬೆನ್ನು ಬಿಡದಣ್ಣಪ್ಪ ಸ್ವಾಮಿಗೆ । ಎನ್ನ ಭಕ್ತಿಯ ಸೇವೆ ಸಲಿಸುವೆ ॥ ೯ ॥
ಭೂತಳದಿನಾಕಾಣೆ ನಿನಗೆಣೆಯಾ । ಶ್ರೀ ಮಂಜುನಾಥನೆ ॥
ಪಾತಕವ ಪರಿಹರಿಪ ಗುಣಮಣಿಯಾ ॥
ಕಾತರದಿ ಕಂಬನಿಯ ಕರೆಯುವ । ಪ್ರೀತಭಕ್ತರನೊಲಿದು ಪೊರೆಯುವ ॥
ಮಾತು ಬಿಡದ ಮಹೇಶನೆಂಬುವ । ಕೀರ್ತಿ ಹಬ್ಬಿದೆ
ಜಗದೊಳೆಲ್ಲಿಯು ॥ ೧೦ ॥
ಧರ್ಮಕ್ಷೇತ್ರದಿವಾಸವನು ಗೈದು । ಕೀರ್ತಿಯಲಿಮೆರೆದು । ಸ-
ದ್ಧರ್ಮಕಾರ್ಯಗಳನ್ನು ಕೈಗೊಂಡೂ ॥
ಕರ್ಮಪಾಶದಿ ತೊಳಲಿ ಬಳಲುವ । ಕರ್ಮಜೀವಿಗಳಾದನರರನು ॥
ಧರ್ಮಕ್ಷೇತ್ರದಿ ನಿನ್ನ ಭಕ್ತರ । ಉಮ್ಮಳವಪರಿಹರಿಸಿ ಕಾಯ್ವೆ ॥ ೧೧ ॥
ಮಂಗಳವು ಗಜಮುಖಗೆ, ಅಮ್ಮನಿಗೆ । ಶ್ರೀ ಮಂಜುನಾಥನೆ ॥
ಮಂಗಳವು ಸಿರಿ ಧರ್ಮದೇವತೆಗೇ ॥
ಮಂಗಳವು ಅಣ್ಣಪ್ಪ ಸ್ವಾಮಿಗೆ । ಮಂಗಳವು ಭಕ್ತಾದಿ ಜನರಿಗೆ ॥
ಮಂಗಳವು ಕ್ಷೇತ್ರಾಧಿನಾಥಗೆ । ಮಂಗಳವು ಸದ್ಧರ್ಮಕಾರ್ಯಕೆ ॥ ೧೨ ॥

---

॥ ಶ್ರೀ ಚಂದ್ರನಾಥಸ್ವಾಮಿ ಸ್ತುತಿ ॥ (ರಾಗ—ಬೇಹಾಗ್—ಏಕತಾಳ)

ಚಂದ್ರನಾಥ ತವಪಾದ ಪದ್ಮದಲಿ। ವಂದಿಸುವೆನು ನಾ ಭಕ್ತಿಯಲಿ ॥
ಇಂದ್ರಲೋಕದತ್ಯಧಿಕ ಸಂಪದದಿ। ಚಂದದಿ ಮೆರೆಯುವ ನಿನ್ನನು
ಸ್ಮರಿಸುವೆ ॥ ೧ ॥

ಧರ್ಮಸ್ಥಳ ಪುರದಲಿ ಶೋಭಿಸುತಾ। ಧರ್ಮದ ಜ್ಞಾನವ
ಸಕಲರಿಗೀಯುತ ॥
ಕರ್ಮಪಾಶವನು ಬಿಡಿಸುತ ಪೊರೆಯುವ। ಧರ್ಮಮೂರ್ತಿ ನಾ ॥
ನಿನ್ನ ಧ್ಯಾನಿಸುವೆ ॥ ೨ ॥

ದಾರಿತಪ್ಪಿ ಸಂಸಾರದಿ ತೊಳಲುತ। ಸೇರಿ ನಿನ್ನ ಪಾದಪದ್ಮವ ನೆನೆದರೆ ॥
ಕೋರಿಕೆಗಳನೀಡೇರಿಸಿ ಕೊಡಿಸುತ। ಪಾರುಗಾಣಿಪೆ ಭವವಾರಿಧಿ
ಯಿಂದಲಿ ॥ ೩ ॥

ಸತ್ಯಧರ್ಮಕಭಯುವನೀಡುತಿಹಾ। ಸ್ತುತ್ಯಧರ್ಮ ದೇವತೆಗಳ ಕೂಡಿ।
ಮರ್ತ್ಯಮುಕುಟಮಣಿ ಹೆಗ್ಗಡೆಯವರನು। ನಿತ್ಯವು ಹರಸುವ
ಸಚ್ಚಿದಾನಂದನೆ ॥ ೪ ॥

ಜೀವದಯಾಮಯ ಧರ್ಮವು ಲೋಕದಿ। ಭಾವಿಸಲತಿ ಪರಮೋತ್ತಮವು॥
ಭಾವುಕ ಜನರನು ಸತ್ಯಪ್ರೇಮದಿ। ಪಾವನಗೊಳಿಸುವ ಶ್ರೀ ವಿಭುವೇ ॥ ೫ ॥

ರತ್ನತ್ರಯ ಭೂಷಿತ ಭೂಷಣನೇ। ರತ್ನಾಕರನಂದದಿಶೋಭಿಪನೇ ॥
ರತ್ನವರ್ಮ ಹೆಗ್ಗಡೆಯರಿಗೊಲಿದಿಹ। ರತ್ನಮೂರ್ತಿ
ಶ್ರೀ ಚಂದ್ರನಾಥ ನಮೋ ॥ ೬ ॥

---

॥ ಮಂಜುನಾಥ ಸ್ತುತಿ ॥ (ರಾಗ—ಅಠಾಣಾ-ರೂಪಕತಾಳ)

ಧನ್ಯನಾದೆನು। ಶ್ರೀ ಮಂಜುನಾಥ। ಧನ್ಯನಾದೆನು ॥
ಧನ್ಯನಾದೆ ನಿನ್ನಪಾದ। ವನ್ನು ಸೇರಿ ನಮಿಸಿ ಭಜಿಸಿ ॥ ಪಲ್ಲ ॥

ಪುಣ್ಯಕ್ಷೇತ್ರದಲ್ಲಿ ನೆಲಸಿ। ನಿನ್ನ ನಂಬಿದವರ ಹರಸಿ
ಬೆನ್ನು ಬಿಡದೆ ಪೊರೆಯುವಂಥ। ಸನ್ನುತಾಂಗ ನಿನ್ನ ನೋಡಿ ॥ ೧ ॥

ಭೂತಪ್ರೇತ ಬಾಧೆವೈರಿ—ವ್ರಾತವೀವ ವಿವಿಧಕಷ್ಟ ॥
ಘಾತಕಾದಿ ದೋಷವೆಂಬ। ಭೀತಿಕಳೆವ ನಿನ್ನ ನೋಡಿ ॥ ೨ ॥

Funding: Tattva Heritage Foundation,Kolkata. Digitization: eGangotri.


ಪತ್ನಿಪುತ್ರ ಬಂಧುಬಳಗ । ಮಿತ್ರಭೂಮಿ ಭೋಗಭಾಗ್ಯ ॥
ಯತ್ನಕಾರ್ಯದಲ್ಲಿ ಎನ್ನ । ನೆತ್ತಿಪೊರೆವ ನಿನ್ನ ನೋಡಿ ॥ ೩ ॥
ಹರಿಕೆ ಕಾಣಿಕೆಗಳ ಮುಡಿಪು । ಶಿರದಿ ಹೊತ್ತು ಬಂದಿರುವೆನು ॥
ವಿರಚಿಸಿದೆನುವಿವಿಧ ಸೇವೆ । ಹರಸಿ ಪೊರೆವ ನಿನ್ನ ನೋಡಿ ॥ ೪ ॥
ಹಣ್ಣು ಕಾಯಿಗಳನು ಮಾಡಿ । ಪುಣ್ಯತೀರ್ಥ ಗಂಧಪಡೆದು ॥
ಬಿನ್ನಹಗಳ ಮಾಡಿ ಮಣಿದು । ಜನ್ಮಸಫಲ ನಿನ್ನ ನೋಡಿ ॥ ೫ ॥

---

॥ ಭಜನಾ ಪದ್ಯ ॥

ಶ್ರೀ ಧರ್ಮಸ್ಥಳ ಕ್ಷೇತ್ರಾಧೀಶ್ವರ ಮಂಜುನಾಥಾ
ಸದ್ಧರ್ಮದ ತವರೂರಲಿ ನೆಲಸಿದ ಮಂಜುನಾಥಾ ॥ ೧ ॥
ಭಕ್ತಮನೋಜನದಿಷ್ಟವನೀಯುವ ಮಂಜುನಾಥಾ
ಮುಕ್ತಿಪ್ರದಾಯಕ ಮೂಲೋಕದೊಡೆಯನೆ ಮಂಜುನಾಥಾ ॥ ೨ ॥
ಸತ್ಯಧರ್ಮಗಳ ಬಿಡದೆ ಪಾಲಿಸುವ ಮಂಜುನಾಥಾ ॥
ಮಿಥ್ಯಮಾಯೆ ಮೋಸಗಳನಡಗಿಸುವ ಮಂಜುನಾಥಾ ॥ ೩ ॥
ಭಕ್ತಕಾಮ ಕಲ್ಪದ್ರುಮನೆನಿಸುವ ಮಂಜುನಾಥಾ ॥
ಭಕ್ತಮನೋಭೀಷ್ಟದ ಸುರಧೇನುವೆ ಮಂಜುನಾಥಾ ॥ ೪ ॥
ನೇತ್ರಾವತಿ ನದಿತೀರ್ಥದಿ ಮಿಾಯುವ ಮಂಜುನಾಥಾ
ನೇತ್ರಾನಂದದ ಪ್ರಭೆಯನು ಬೀರುವ ಮಂಜುನಾಥಾ ॥ ೫ ॥
ಧರ್ಮಸಮ್ಮೇಳನ ಜ್ಞಾನದಾನಿಯೇ ಮಂಜುನಾಥಾ ॥
ಧರ್ಮಕ್ಷೇತ್ರದಿ ನಿತ್ಯ ಅನ್ನದಾನಿಯೇ ಮಂಜುನಾಥಾ ॥ ೬ ॥
ಧರ್ಮಸತ್ಯ ಸಂರಕ್ಷಣೆಗೈಯುವ ಶ್ರೀ ಮಂಜುನಾಥಾ
ಧರ್ಮಕಾರ್ಯ ಸಂತೋಷರೂಪನೇ ಮಂಜುನಾಥಾ ॥ ೭ ॥
ಧರ್ಮದ ಮರ್ಮವನಿತ್ಯ ಬೋಧಿಸುವ ಮಂಜುನಾಥ ॥
ಧರ್ಮದೇವತೆಗಳಾದಿ ಶಕ್ತಿಯೇ ಮಂಜುನಾಥಾ ॥ ೮ ॥
ಭವದುರಿತಾಂಬುಧಿಯನು ದಾಟಿಸುವಾ ಮಂಜುನಾಥಾ ॥
ಕವಿದ ಕತ್ತಲೆ ಕಳೆದು ಬೆಳಗುವಾ ಮಂಜುನಾಥಾ ॥ ೯ ॥
ಭಾವಭಕ್ತಿಗೊಲಿವಂಥ ದೇವನೆ ಮಂಜುನಾಥಾ ॥
ಜೀವಜಾಲಿಗಳನೊಲಿದು ಪಾಲಿಸುವ ಮಂಜುನಾಥಾ ॥ ೧೦ ॥

---

## ॥ ಅಕ್ಷರಮಾಲಾ ಭಜನಾ ॥

ಅಗಜಾವಲ್ಲಭ, ಅನಂತಮಹಿಮಾ, ಮಂಜುನಾಥಾ ॥
ಆಶ್ರಿತರಕ್ಷಕ, ಆಪದ್ಬಾಂಧವ ಮಂಜುನಾಥಾ ॥ ೧ ॥

ಇಳೆಗಧಿನಾಥನೆ, ಇಕ್ಷುಚಾಪರಿಪು ಮಂಜುನಾಥಾ ॥
ಈಶಮಹೇಶನೆ, ಉರಗಾಭರಣನೆ ಮಂಜುನಾಥಾ ॥ ೨ ॥

ಊಳಿಗದವರ ಊನವ ತಿದ್ದುವ ಮಂಜುನಾಥಾ ॥
ಎರಗಿದವರನು ಎತ್ತಿಪೊರೆಯುವ ಮಂಜುನಾಥಾ ॥ ೩ ॥

ಏಕಾನೇಕನೆ, ಏಕದಂತಪಿತ ಮಂಜುನಾಥಾ ॥
ಐಮೊಗದಾತನೆ, ಐಕಿಲ್ವೆಟ್ಟದವಾಸಾ ಮಂಜುನಾಥಾ ॥ ೪ ॥

ಒಳಹೊರಗೆಲ್ಲವು, ಒಲಿದರಿಗೀಯುವ ಮಂಜುನಾಥಾ ॥
ಓಂಕಾರರೂಪನೆ, ಓಂನಮ ವಂದಿತ ಮಂಜುನಾಥಾ ॥ ೫ ॥
ಔಚಿತ್ಯವರಿತು ಪೊರೆಯುವ ಮಂಜುನಾಥಾ ॥
ಅಂತಕನೊಡೆಯನೆ, ಅಂತ್ಯದನಂತನೆ ಮಂಜುನಾಥಾ ॥ ೬ ॥

ಕಂದರ್ಪಹರ, ಕಂತುಪಿತನಸಖ ಮಂಜುನಾಥಾ ॥
ಖದ್ಯೋತಾಕ್ಷನೆ, ಖಳಕುಲವಂದಿತ ಮಂಜುನಾಥಾ ॥ ೭ ॥

ಗಜಚರ್ಮಾಂಬರ, ಗಜಮುಖ ಜನಕನೆ ಮಂಜುನಾಥಾ ॥
ಘನಮಹಿಮನೆ, ಘನಕರುಣಾವಾರಿಧಿ ಮಂಜುನಾಥಾ ॥ ೮ ॥

ಚಂದ್ರಚೂಡ, ಚರ್ಮಾಂಬರ ಚಲುವಿನ ಮಂಜುನಾಥಾ ॥
ಛಲದಂಕ ಮಲ್ಲನೆ ಛದ್ಮವೇಷಪ್ರಿಯ ಮಂಜುನಾಥಾ ॥ ೯ ॥

ಜಗದಧಿ ದೈವನೆ, ಜಗದಾಧಾರನೆ ಮಂಜುನಾಥಾ ॥
ಝಷರೂಪನಸಖ ಝುಂಝಾಪ್ರಿಯ ಮಂಜುನಾಥಾ ॥ ೧೦ ॥

ಟಂಕಾರ ಪ್ರಿಯ, ಡಮರುಧರನೆ ಮಂಜುನಾಥಾ ॥
ತತ್ತ್ವಸ್ವರೂಪನೆ, ತಪದಧಿದೇವನೆ ಮಂಜುನಾಥಾ ॥ ೧೧ ॥

ದರ್ಪದಮನನೇ; ದನುಜಾರಾಧಿತ ಮಂಜುನಾಥಾ ॥
ಧರ್ಮಸ್ಥಳಾಧಿಪ ಧರೆಗಧಿನಾಥನೆ ಮಂಜುನಾಥಾ ॥ ೧೨ ॥

ನಕಂಚರಹರ, ನಯಭಯ ಪ್ರಿಯನೇ ಮಂಜುನಾಥಾ ॥
ಪಶುಪತಿ ಪರಶಿವ, ಪರಮೇಶ್ವರನೇ ಮಂಜುನಾಥಾ ॥ ೧೩ ॥

ಫಣಿಭೂಷಣ, ಫಾಲಾಕ್ಷ ಪರಾತ್ಪರ ಮಂಜುನಾಥಾ ॥
ಬಂಧವಿಮೋಚನ, ಬಾಣಾಸುರ ಪ್ರಿಯ ಮಂಜುನಾಥಾ ॥ ೧೪ ॥

ಭಸಿತಾಂಗನೆ, ಭವ ಭವದೂರನೆ ಮಂಜುನಾಥಾ ॥
ಮಂಜುಳರೂಪನೆ, ಮನುಮುನಿಪೂಜಿತ ಮಂಜುನಾಥಾ ॥ ೧೫ ॥

ಯಜ್ಞಾಧೀಶ್ವರ, ಯಜ್ಞೇಶ್ವರನುತ ಮಂಜುನಾಥಾ ॥
ರಜತಾದ್ರೀಶನೆ, ರಮಣೀಯರೂಪನೆ ಮಂಜುನಾಥಾ ॥ ೧೬ ॥

ಲಂಬೋದರಪಿತ, ಲಕ್ಷಣ ಪೂರ್ಣನೆ ಮಂಜುನಾಥಾ ॥
ವಸುಧಾಧೀಶ್ವರ, ವಕ್ರತುಂಡಪಿತ ಮಂಜುನಾಥಾ ॥ ೧೭ ॥

ಷಣ್ಮುಖ ಜನಕನೆ, ಶಶಿಧರ ಸುಂದರ ಮಂಜುನಾಥಾ ॥
ಸಕಲಾಭೀಷ್ಟ ಪ್ರದಾಯಕ ಶಕ್ತನೆ ಮಂಜುನಾಥಾ ॥ ೧೮ ॥

ಹರಪರಮೇಶ್ವರ, ಹರಿಪ್ರಿಯ ಸರ್ವೋತ್ತಮ ಮಂಜುನಾಥಾ ॥
ಕ್ಷಮಾವಿಭೂಷಿತ, ಕ್ಷಾತ್ರತೇಜ ಪ್ರಿಯ ಮಂಜುನಾಥಾ ॥ ೧೯ ॥

---

॥ ಶ್ರೀ ಅಣ್ಣಪ್ಪಸ್ವಾಮಿ ಸ್ತುತಿ ॥ (ರಾಗ ಶಂಕರಾಭರಣ ಅಷ್ಟತಾಳ)

ಪುಣ್ಯಮೂರುತಿಯೆ ಶ್ರೀ ಅಣ್ಣಪ್ಪ ಸ್ವಾಮಿಯೇ
ನಿನ್ನ ನಂಬಿರುವೆ ನಾನು ॥
ಧನ್ಯನಾದೆನು ನಿನ್ನ ಸಂದರ್ಶನವ ಮಾಡಿ
ಮನ್ನಿಸು ಸರ್ವಾಪರಾಧಗಳೆಲ್ಲವ ॥ ೧ ॥

ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿ ॥ ಭಕ್ತ ॥
ಕ್ಷೇಮಚಿಂತಕನಾಗಿರುತಲಿ ॥
ಕ್ಷಾಮ, ಡಾಮರ, ಕೊಲೆ, ಸುಲಿಗೆ, ಕಳವು, ರುಜೆ,
ಭೂಮಿಸಂಪದ, ಸತಿ, ಸುತ, ಪಶುಕಲಹದ
ವೈಮನಸುಗಳ ಬೇಸರವನ್ನು ತೊಲಗಿಸಿ
ಪ್ರೇಮದಿಂದಲಿ ಕಾಯ್ವ ಭೀಮಬಲಾಢ್ಯನೆ ॥ ೨ ॥

ಮಂಗಳಾರತಿ, ಬೆಲ್ಲಕಾಯಿ । ಗೈದು ॥
ಹಿಂಗದರ್ಪಿಸಿ, ಹಣ್ಣು ಕಾಯಿ ॥
ಭಂಗಬವಣೆಗಳ ಸನ್ನಿಧಿಯಲಿನಿಂದು
ಹಿಂಗಿಸೆನ್ನುತ ಭಕ್ತಿಭಾವದಿಪ್ರಾರ್ಥಿಸಿ
ತುಂಗವಿಕ್ರಮನೆ ಕಾಪಾಡೆಂದು ನಮಿಸಲು
ಬೆಂಗಡೆಯಲಿಬಂದು ಪೊರೆವ ಮಹಾತ್ಮನೆ

---

॥ ಶ್ರೀ ಮಂಜುನಾಥಸ್ವಾಮಿ ಸ್ತುತಿ ॥ (ರಾಗ ಕಲ್ಯಾಣಿ ಅಷ್ಟತಾಳ)

ನಾನಿನ್ನದಾಸನಯ್ಯ ।ಶ್ರೀ ಮಂಜುನಾಥಾ
ನಾನಿನ್ನ ದಾಸನಯ್ಯ ॥ ಪಲ್ಲ ॥
ನಾನು ನಿನ್ನಯ ದಾಸನಹುದು । ನೀನು ಈ ಜಗಧೀಶನಹುದು
ಜ್ಞಾನ ಮೂರುತಿ ಭಕ್ತಕೋಟಿಯು । ಮಾನವನು ಕಾಪಾಡು ಮನ್ನಿಸು ॥೧॥
ಸರ್ವಕಾರಣಕಾದಿ ನೀನು । ಸರ್ವಕಾರ್ಯದೊಳಾದಿ ನೀನು
ಸರ್ವಶಕ್ತಿಯು ಸರ್ವಮಹಿಮೆಯು । ಸರ್ವಲೋಕಾಧೀಶ ಶಂಕರ ॥ ೨ ॥
ನೃತ್ಯಗಾನ ಪ್ರಿಯ ನೀನು । ಮರ್ತ್ಯಜನರುದ್ಧಾರಿ ನೀನು ।
ಪೃಥ್ವಿಮೂರರ ಭಕ್ತವರ್ಗವ । ನಿತ್ತಿಪೊರೆಯುವ ಚಂದ್ರಶೇಖರ ॥ ೩ ॥
ತಪ್ಪು ಸಾವಿರ ಗೈದೆ ನಾನು । ಒಪ್ಪಿಮನ್ನಿಸಿ ಪೊರೆವೆ ನೀನು ।
ಸುಪ್ರಕಾಶವ ಬೀರಿಹೃದಯದೊ । ಳಿಪ್ಪತಮವನು ಹರಿಸಿ ಬೆಳಗಿಸು ॥೪॥

---

॥ ತಾಯಿ ಸ್ತುತಿ ॥ (ರಾಗ ಬೇಗಡೆ ಅಷ್ಟತಾಳ)

ವಂದಿಸುವೆನಾನಿಂದು ಮಹತಾಯೇ । ಕನ್ಯಾಕುಮಾರಿಯೇ
ನಿಂದೆಸನ್ನಿಧಿಯಲ್ಲಿ ನೀ ಕಾಯೇ ॥ ಪಲ್ಲ ॥
ಬಂದೆ ತವಪಾದಾಂಬುರುಹಗಳ । ಹೊಂದಿ ಸೇವಿಸಿಪೂರ್ವಕರ್ಮದ
ಕುಂದು ಕೊರತೆಯು ಕಳೆದು ಮನಸಿನ । ದಂದುಗವನೊಲಿದಿತ್ತು
ಪಾಲಿಸು ॥ ೧ ॥
ಧರೆಗೆ ಧರ್ಮವ ನೀಡಲೆಂದೆನುತಾ । ಕನ್ಯಾಕುಮಾರಿಯೇ
ಹೊರಟು ನಾಲ್ವರು ಅವತರಿಸಿ ಬರುತಾ ॥
ಚರಿಸಿ ಯೋಗ್ಯವಿದೆಂದು ಸಂತಸ । ವೆರಸಿ ಕಳತ್ರಾಯಿ, ಕಾಳರಾಹುವು
ವರಕುಮಾರ ಸ್ವಾಮಿ ಸಹಿತಲೆ । ಸ್ಥಿರದೆ ನೆಲಸಿದ ಧರ್ಮಕ್ಷೇತ್ರವು ॥ ೨ ॥

ಆದಿಯಲಿ ತಾನಿಲ್ಲಿ ನೆಲಸಿದರ್ಧ । ಅಣ್ಣಪ್ಪ ಸ್ವಾಮಿಯು ।
ಮೋದದಲಿ ಒಡಗೊಂಡು ಸಂತಸದಾ ॥
ವಾದ ಭೇದಗಳಿಲ್ಲದಿಹ ಪ್ರಭು । ವಾದ ಹೆಗ್ಗಡೆಯರಿಗೆ ವಲಿದುಪ್ರ–
ಬೋಧ ಧರ್ಮ ಜ್ಯೋತಿ ಬೆಳಗಲು । ಹಾದಿತೋರಿದ ಆದಿ ಮಹಿಮಳೆ ॥೩॥

ನಿತ್ಯ ಬ್ರಹ್ಮಚರ್ಯವನು ವಹಿಸಿ । ಕನ್ಯಾಕುಮಾರಿಯೆ ।
ಸತ್ಯ ಧರ್ಮದ ಬೆಳಕು ಹೊರಸೂಸಿ ॥
ಮರ್ತ್ಯಲೋಕದ ಪಾಪಕೂಪದಿ । ನಿತ್ಯ ಮುಳುಗುತ್ತೇಳುವವರನು
ಎತ್ತಿ ಕರುಣಾಕರದಿ ಪರಮಪ- । ವಿತ್ರರೆನಿಸಲು ನಿತ್ಯಶ್ರಮಿಸುವ ॥ ೪ ॥

---

॥ ಶ್ರೀ ಕ್ಷೇತ್ರದ ಮಹಿಮೆ ॥ (ಲಾವಣಿ-ಏಕತಾಳ)

ಶ್ರೀ ಧರ್ಮಸ್ಥಳ ಕ್ಷೇತ್ರದ ಮಹಿಮೆಯ, ಸ್ವಾಮಿಯು ಧ್ಯಾನಿಸಿ ಪೇಳುವೆನೂ
ಈ ಮಹಿಯೊಳಗೀವಿಧದಸುಕ್ಷೇತ್ರವು । ಬೇರಿಲ್ಲಿಯು ತಾಸಿಲ್ಲವಿದೂ ॥ಪಲ್ಲ॥

ಕನ್ನಡನಾಡಿನ ಕನ್ನಡ ಜಿಲ್ಲೆಯೊಳಿರುವುದು ಶ್ರೀ ಧರ್ಮಸ್ಥಳವೂ
ಸಹ್ಯಾದ್ರಿಯ ಸೆರಗಿನ ನೇತ್ರಾವತಿ ನದಿಯ ಸಮೀಪದಿ ಮೆರೆಯುವ್ರದೂ
ಸಿದ್ಧರು ಋಷಿಮುನಿ ಮುನಿಗಳು ಪೂರ್ವದಿತಪವಾಚರಿಸಿದ ಕ್ಷೇತ್ರವಿದೂ
ಮಹಾಯಜ್ಞ ಯಾಗಾದಿ ಸತ್ಕರ್ಮವು ದಾನಧರ್ಮಗಳ ಸ್ಥಾನವಿದೂ ॥೧॥

ಸರ್ವ ಧರ್ಮವನು ಸಮಾನಭಾವದಿ ಕಾಣುವ ಮಹಿಮೆಯು ಕ್ಷೇತ್ರವಿದೂ
ಸರ್ವಧರ್ಮಸಮನ್ವಯ ಸಾರವ ಜನರಿಗೆ ನೀಡುವ ಸ್ಥಾನವಿದೂ
ಸಾವಿರ ವರುಷದ ಹಿಂದಕೆ ಇದ್ದರು ಇಲ್ಲಿಯೆ ಬರ್ಮಣ್ಣ ಹೆಗ್ಗಡೇರು
ಧರ್ಮಪತ್ನಿ ಶ್ರೀದೇವಿ ಬಲ್ಲಾಳತಿಯೊಂದಿಗೆ ಧರ್ಮದಿ ಬಾಳಿದರು ॥ ೨ ॥

ಧರೆಗವತರಿಸಿದ ಧರ್ಮದೇವತೆಗಳಿಲ್ಲಿಗೆ ಬಂದರು ನರರಾಗಿ
ಆನೆಕುದುರೆಗಳನೇರಿ ತೇಜದಲಿ ಮೆರೆದರು ಮಹಾವಿಭುಗಳಾಗಿ
ಮಹಾತ್ಮರಿವರೆಂದರಿತು ಹೆಗ್ಗಡೆರು ತಕ್ಕ ಸತ್ಕಾರವ ಮಾಡಿದರು
ಸತ್ಕರಿಸಲು ಸಂತಸದಲಿ ಹೊರಟರು ಹೆಗ್ಗಡೆಯರ ಬೀಳ್ಕೊಂಡರು ॥ ೩ ॥

ಅಂದಿನ ರಾತ್ರಿಯೆ ಹೆಗ್ಗಡೆಯವರಿಗೆ ಕನಸಿನೊಳವರೀ ಕಾಣಿಸುತಾ
ಧರೆಯುಲಿ ಧರ್ಮಸ್ಥಾಪನೆಗಾಗಿಯೆ ಬಂದೆವು ನಾಲ್ವರು ನಾವೆನುತಾ

ನಿಮ್ಮರಮನೆಯನೆ ನಮ್ಮ ನಿವಾಸಕೆ ಬಿಡುವುದು, ನಮ್ಮಯ ಉತ್ಸವಕೆ
ಗುಡಿಗಳ ಕಟ್ಟಿಸಿ ಪೂಜಿಸಿ ನಂಬಿರಿ ಶುಭನಿಮಗಿದರಿಂ ಮುಂದಕ್ಕೆ ॥ ೪ ॥

ಧರ್ಮಕಾರ್ಯಗಳ ನಡೆಸಿರಿ ನಿತ್ಯವು ನಿಮ್ಮ ಮನೋಭೀಷ್ಟಗಳೆಲ್ಲ
ನಿಮ್ಮ ಸರ್ವಕಾರ್ಯಗಳಿಗು ನಾವೇ ಬೆಂಬಲವಿರುವೆವು ಭಯವಿಲ್ಲ
ಬೆಟ್ಟದ ತುದಿಯಲಿ ಕಟ್ಟಿಸಿ ಗುಡಿಗಳ ಪೂಜಿಸಿರೆನ್ನುತ ತೋರಿಸುತ್ತಾ
ನಿಷ್ಠೆಯೊಳೆಮ್ಮನು ನಂಬಿದ ಸರ್ವರ ಭೀಷ್ಟವನೀವೆವು ನಾವೆನುತಾ ॥ ೫ ॥

ಉತ್ತಮ ಕುಲದವರಿಬ್ಬರ ನೆಮಗೆ ಪಾತ್ರಿಗಳಾಗಿಯೇ ನೇಮಿಸಿರಿ
ಹೊತ್ತಿನೊಳವರಿಂದಲೆ ನಮ್ಮಭಿಮತವೊರೆವೆವು ನೀವದನಾಲಿಸಿರಿ
ಎಂದೀ ಪರಿಯಲಿ ಕನಸಿನ ನುಡಿಗಳನಾಲಿಸಿ ಅದರಂದದೊಳೆಲ್ಲಾ
ತನ್ನ ನಿವಾಸದ ನೆಲ್ಯಾಡಿಬೀಡನು ಧರ್ಮದೇವತೆಗಳಿಗೆ ಬಿಡಲೂ ॥ ೬ ॥

ತನಗೆ ಬೇರರಮನೆ ಕಟ್ಟಿಸಿ, ಬೆಟ್ಟದಿ ಗುಡಿಗಳನೆಲ್ಲವ ಕಟ್ಟಿಸುತಾ
ಧರ್ಮದೇವತೆಗಳಿಗೆ ಉತ್ಸವ ಪೂಜೆಗಳೆಲ್ಲವ ನಡೆಸುತ್ತಾ
ದಾನಧರ್ಮಗಳ ನಡೆಸಲು ವಿಪ್ರರ ಸಂತರ್ಪಣೆ ಗೈಸುವುದಕ್ಕೆ
ದೇವಾಲಯವಿಲ್ಲದೆ ಸಂತರ್ಪಣೆ ಹೇಗೆಂದೆನುತಲಿ ಮರುಗಲಿಕೇ ॥ ೭ ॥

ಹೆಗ್ಗಡೆಯರ ಮನಮರುಕವನರಿತು ಅಣ್ಣಪ್ಪ ಸ್ವಾಮಿಯು ತಕ್ಷಣವೇ
ಕದಿರೆಗೆ ಹೋಗಿ, ಕಾಶಿಯಿಂದಲ್ಲಿಗೆ ಬಂದ ಲಿಂಗವನು ಆ ಕ್ಷಣವೇ
ತಂದು ಕನ್ಯಾಕುಮಾರಿಯ ಗುಡಿಯೊತ್ತಿನೊಳಿಡಲದ ಹೆಗ್ಗಡೆಯರು ತಾನು
ಪುಣ್ಯಪ್ರತಿಷ್ಠೆಯ ಮಾಡಿಸಿ ದೇಗುಲ ಕಟ್ಟಿಸಿದರು ಸಂತೋಷದಲಿ ॥ ೮ ॥

ನಿತ್ಯಬ್ರಾಹ್ಮಣರ ಸಂತರ್ಪಣೆಗೆ ಛತ್ರವ ಕಟ್ಟಿಸಿ ನಡೆಸಿದರು
ಕ್ಷೇತ್ರಕೆ ಬರುವ ಸರ್ವಜನರಿಗೂ ಅನ್ನ, ವಸತಿಗಳ ನೀಡಿದರು
ಮತಧರ್ಮದ ಕುಲಜಾತಿ ಭೇದಗಳನೆಣಿಸದೆ ಧರ್ಮವ ಸರ್ವರಿಗೆ
ನಿತ್ಯನಿರಂತರನೀಡುವ ಕ್ಷೇತ್ರವು ದೇಶದೊಳಿದು ಪ್ರಥಮವು ನೋಡೆ ॥ ೯ ॥

ಸಾವಿರ ವರುಷದ ಹಿಂದೆಯೆ ಇಲ್ಲಿಯು ಸರ್ವಧರ್ಮ ಸಮತಾಭಾವ
ಜೈನಮತದ ಹೆಗ್ಗಡೆಯರು ಒಡೆಯರು, ಇಲ್ಲಿಯ ದೇವರು ಶಿವನಾಗಿ,
ಪೂಜೆಗೆ ಅರ್ಚಕರೆಲ್ಲರು ವೈಷ್ಣವರೀ ವಿಧವಿಲ್ಲಿಯ ಹಿರಿತನವೂ
ಸರ್ವಧರ್ಮ ಸಂಗಮದ ಸಂದೇಶವು ದೇಶಕೆ ಬೆಳಕನು ನೀಡಿಹುದು॥೧೦॥

ಕದಿರೆಯಿಂದಿಲ್ಲಿಗೆ ತಂದಲಿಂಗವದು ಮಂಜುನಾಥಾ ಎಂದು ಸ್ಮರಿಸಿದರು
ವಿಧವಿಧ ಸೇವೆಯೊಳರ್ಚಿಸಿ ಭಕ್ತರು ಮನದಿಷ್ಟಾರ್ಥವಹೊಂದಿದರು
ಹೆಗ್ಗಡೆಯವರಿಗೀ ಕ್ಷೇತ್ರದ ಪಟ್ಟವ ಧರ್ಮದೈವಗಳು ಕಟ್ಟುವರೂ
ಪಟ್ಟವಾದ ಹೆಗ್ಗಡೆಯರು ಕ್ಷೇತ್ರದ ಸರ್ವಕಾರ್ಯಕಧಿಪತಿಯಹರೂ ॥ ೧೧ ॥

ಪೂರ್ವದಿ ಬಂದಿದೆ ಈ ಪದ್ಧತಿಯೀ ಕ್ಷೇತ್ರದಿ ನಡೆದಿದೆ ಈ ವರೆಗೆ
ದೇವರ ದೈವದ ನಿತ್ಯ ವಿಶೇಷದಕಾರ್ಯವು ಹೆಗ್ಗಡೆಯರು ನುಡಿದಂತೆ
ನಡೆಯುವುದವರಿಗೆ, ಸಹಕರಿಸಲು ನಾಲ್ವಿಕೆಯವರಿರುತಿಹರು
ನಾಲ್ವಿಕೆಯವರನು ಹೆಗ್ಗಡೆಯವರೇ ನೇಮಕಮಾಡುವರು ॥ ೧೨ ॥

ಇಲ್ಲಿಗೆ ಹತ್ತಿರ ಕಲ್ಲೇರಿಯಲ್ಲಿಯ ಕಲ್ಲೇರಿತ್ತಾಯ ದೈವವನೂ
ಪದ್ಮಯ ಹೆಗ್ಗಡೆಯರ ಕಾಲದೊಳವರಿಲ್ಲಿಗೆ ತಂದರು ಗೋಪುರದಿ
ನೆಲೆಗೊಳಿಸಿದರಾದೈವವು ಅಣ್ಣಪ್ಪ ಸ್ವಾಮಿಯ ಸಂಗಡ ಇರುವಂತೆ
ಗೈದರು ಸ್ಥಳದ ಆಣೆ ಮಾತುಗಳ ತೀರ್ಮಾನಕೆ ಬೆಂಬಲದಂತೆ ॥ ೧೩ ॥

ಹೆಗ್ಗಡೆಯರು ಹಲವರು ಅಧಿಕಾರವ ನಡೆಸಿದರೀ ದೇವಾಲಯದಾ
ಪದ್ಧತಿಯಂತೆಯೆ ಕ್ಷೇತ್ರದ ಬಹು ವಿಧದುನ್ನತಿಕಾರ್ಯವ ನಡೆಸಿದರೂ
ಚಂದಯ್ಯ ಹೆಗ್ಗಡೆಯೆಂಬವರಿಲ್ಲಿಯ ಅಧಿಕಾರಾವಧಿಯಲಿ ಬಹಳ
ಕ್ಷೇತ್ರದ ಬಹು ವಿಧದಭಿವೃದ್ಧಿಯನೇ ಸಾಧಿಸಿ ಮಾಡಿದರೂ ॥ ೧೪ ॥

ಇವರೇ ಈಗಿನ ಶ್ರೀ ರತ್ನವರ್ಮರ ತೀರ್ಥರೂಪರಾಗಿಹರು
ಶ್ರೀ ಚಂದ್ರನಾಥ ಸ್ವಾಮಿಯ ಬಸದಿಯ ಕಟ್ಟಿಸಿ ಪಂಚಕಲ್ಯಾಣವ
ಮಾಡಿಸುತ
ಧರ್ಮದೈವಗಳಿಗಿತ್ತರು ಸಂಭ್ರಮದಿಂದ ಮಹಾನಡಾವಳಿಯನ್ನು
ನೀರಿಗೆ ನಲ್ಲಿಯಹಾಕಿಸಿ, ಜಮಾ ಉಗ್ರಾಣವ ಭದ್ರವಾಗಿ ಕಟ್ಟಿಸುತ ॥ ೧೫ ॥

ಚಂದಯ್ಯ ಹೆಗ್ಗಡೆಯರ ನಂತರ ಮಂಜಯ್ಯ ಹೆಗ್ಗಡೆಯರು ಬಂದು
ಧರ್ಮಸಮ್ಮೇಳನ, ಧರ್ಮನಡಾವಳಿ, ಗುರುಕುಲ ವಿದ್ಯಾಲಯವನ್ನು,
ವಿದ್ಯುದ್ದೀಪವ, ಉದ್ಯಾನವನ, ವೃದ್ಧಿಯ ಕೆಲಸವ ಮಾಡಿಸುತ
ಶ್ರದ್ಧೆಯೊಳನುದಿನ ದೇವರ, ದೈವದಕಾರ್ಯಗಳೆಲ್ಲವ ನಡೆಸುತ್ತಾ ॥ ೧೬ ॥

ಮಂಜಯ್ಯ ಹೆಗ್ಗಡೆಯವರ ಬಳಿಕವೆ ಈ ಕ್ಷೇತ್ರದ ಅಧಿಕಾರವ ವಹಿಸಿ
ಇಂದಿನ ಶ್ರೀ ರತ್ನವರ್ಮ ಹೆಗ್ಗಡೆಯವರಿಲ್ಲಿಯ ಬಹುವಿಧ ಕಾರ್ಯದಲಿ

ಅಂದಿಗು ಇಂದಿಗು ಗುರುತು ಹತ್ತದ ಹಾಗೆ ದೇವಾಲಯದ ಒಳಹೊರಗೆ
ಬೆಳ್ಳಿಯ ಕೆತ್ತನೆ ಕೆಲಸದ ಹೊದಿಕೆಯ ಸಾರಣೆ, ಕಾರಣೆ ಸೊಬಗಿನಲಿ ॥೧೭॥

ಕೆರೆಕಟ್ಟೆ, ಉಗ್ರಾಣ, ಬಸದಿಯು, ನೆಲ್ಯಾಡಿಬೀಡಿನ ಸುತ್ತಲು ಬಹಳ
ಛತ್ರ, ದೇವಸ್ಥಾನ ಸುತ್ತಕಾಂಕ್ರೀಟು, ರಸ್ತೆಗೆ ಡಾಮರು ಸಹಿತ
ಅಣ್ಣಪ್ಪ ಬೆಟ್ಟದ ಸೋಪಾನ, ಹತ್ತಿರ ಹಿರಿಯ ಹೆಬ್ಬಾಗಿಲರಚನೆ
ಹಳೆಯ ಕಟ್ಟಡವಿಲ್ಲ, ಹೊಸ ಕಟ್ಟೋಣಗಳೆಲ್ಲ ಸುಂದರಭದ್ರ ಆನಂದ ॥೧೮॥

ಧರ್ಮಛತ್ರದ ಹೊಸ ಕಟ್ಟಡ, ಮಹಡಿಯ ನೂರಾರು ಕೋಣೆಗಳಿಂದ
ಕ್ಷೇತ್ರದ ಭಕ್ತಾದಿಗಳು ಬಂದು ಕಂಡು ಸಂತೋಷದಿ ಹೊಗಳಿ ಹಾಡುವರು
ಈಗಿನ ಶ್ರೀ ರತ್ನವರ್ಮ ಹೆಗ್ಗಡೆಯರಿಗೀಯಲಿ ದೀರ್ಘಾಯು ಕ್ಷೇಮ
ಶ್ರೀ ಮಂಜುನಾಥನು ಧರ್ಮದೇವತೆಗಳು ನಡೆಸಲಿ
ಬಹುಕಾಲವೆಂದು ॥ ೧೯ ॥

ದೇವರ ಹರಿಕೆಯ ಹಣವೆಲ್ಲ ಕ್ಷೇತ್ರದ ಬಹುಮುಖದಭಿವೃದ್ಧಿಗಾಗಿ,
ವೆಚ್ಚಮಾಡಲು ಹೆಗ್ಗಡೆಯರು ಪಣವತೊಟ್ಟು ನಿಂತರೊ ಎಂದು
ಕಾಣುವುದು ॥

ಶ್ರೀ ಸ್ವಾಮಿಯನು ಧರ್ಮದೇವತೆಗಳನಂತರಂಗದಿ ಸಂಪೂರ್ಣ ನಂಬಿ
ಮಾಡುವ ಸರ್ವಕಾರ್ಯಕ್ಕೆ ಶುಭಜಯ ಸುಖಸಂತೋಷಗಳ
ನೀಡುತಿಹರು ॥ ೨೦ ॥

ದುಃಖದುಮ್ಮಾನ, ಸಂಕಷ್ಟ, ಸಂದೇಹದ ಭಕ್ತರಭೀಷ್ಟವನರಿತು
ಪರಿಹಾರವಾಗುವ ಪಥವ ತೋರಿಸಿಕೊಟ್ಟು ಹರಸುವರನುದಿನ ತಾನು
ಸಂಸಾರ ದುಃಖದ ಬಂಧನದಲಿ ನೊಂದ ಭಕ್ತರು ಮರಳಿ ಪೋಪಾಗ
ಬಂಧನ ಕಳೆದಂತೆ, ಮುಗಿಲತ್ತ ಸರಿದಂತೆ ಸಂತಸದಿಂದ
ಹೋಗುವರು ॥ ೨೧ ॥

ಶ್ರೀರತ್ನವರ್ಮ ಹೆಗ್ಗಡೇಯರು ಬಹುಕಾಲ ಬಾಳಲಿ ಬೆಳಗಲಿ ಕ್ಷೇತ್ರ
ಭಕ್ತಾದಿ ಜನರಿಗೆ, ಸೇವಕರಿಗೆ ತನ್ನ ಊರಜನರ ಪ್ರೀತಿಪಾತ್ರ
ಮಲೆನಾಡ ಮಡಿಲಲಿ ಸುಂದರ ಕ್ಷೇತ್ರದ ಧರ್ಮದ ಜ್ಯೋತಿಯು ಬೆಳಗಿ
ದೇಶವ ಬೆಳಗಲಿ, ಆದರ್ಶವಾಗಲಿ ಸತ್ಕೀರ್ತಿ ಸತ್ಪ್ರಭೆಯಿಂದ ॥ ೨೨ ॥

# ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿಯ ಸಾಮಾನ್ಯ ಸೇವೆಗಳ ತಪಸೀಲು

## ಶ್ರೀ ಮಂಜುನಾಥ ಸ್ವಾಮಿಗೆ

| | |
|---|---|
| ಪಂಚಾಮೃತಾಭಿಷೇಕ, ಏಕಾದಶರುದ್ರಾಭಿಷೇಕ ಸಹಿತ | ರೂ. ನ.ಪೈಸೆ |
| ಸುವರ್ಣಪುಷ್ಪ, ಬ್ರಹ್ಮಾದಾಯ, ಬ್ರಹ್ಮಾರ್ಪಣಕ್ಕೆ ಕೂಡಾ | 22—00 |
| ಬಿಲ್ವಪತ್ರಾರ್ಚನಕ್ಕೆ | 6—00 |
| ಕರ್ಪೂರಾರತಿ | 1—25 |
| ಹರಿವಾಣ ನೈವೇದ್ಯ | 10—00 |
| ಕ್ಷೀರಾಭಿಷೇಕ | 6—00 |
| ಕಾರ್ತಿಕ ಪೂಜೆ | 15—00 |

## ಶ್ರೀ ಅಮ್ಮನವರಲ್ಲಿ

| | |
|---|---|
| ಪರಮಾನ್ನ ನೈವೇದ್ಯ | 10—00 |
| ಕರ್ಪೂರಾರತಿ | 1—25 |
| ಕುಂಕುಮಾರ್ಚನೆ | 2—00 |
| ಪಂಚಾಮೃತಾಭಿಷೇಕ | 16—00 |
| ಕಾರ್ತಿಕ ಪೂಜೆ | 15—00 |
| ಹೂವಿನ ಪೂಜೆ | 50—00 |

## ಶ್ರೀ ಗಣಪತಿ ದೇವರಲ್ಲಿ

| | |
|---|---|
| ದೂರ್ವಾರ್ಚನೆ | 3 00 |
| ಪಂಚಕಜ್ಜಾಯ | 3—00 |
| ಮಂಗಳಾರತಿ | 1—25 |
| ಪಂಚಾಮೃತಾಭಿಷೇಕ | 14—00 |

## ಶ್ರೀ ಅಣ್ಣಪ್ಪ ಸ್ವಾಮಿಯಲ್ಲಿ

| | |
|---|---|
| ಬಲಿವಾಡ | 10—00 |
| ಬೆಲ್ಲ ಕಾಯಿ ನೈವೇದ್ಯ | 5—00 |
| ಕರ್ಪೂರಾರತಿ | 1—25 |
| ವಿಶೇಷ ಪೂಜೆ ಬಲಿವಾಡ ಸಮೇತ | 25—00 |

## ಶ್ರೀ ಮಂಜುನಾಥ ದೇವರಿಗೆ ವಿಶೇಷ ಪೂಜೆ ಮತ್ತು ಉತ್ಸವಗಳು

| | |
|---|---|
| ರಂಗಪೂಜೆ (24 ಎಡೆ) | 100—00 |
| ಪಂಚಾಮೃತಾಭಿಷೇಕ ಶತರುದ್ರಾಭಿಷೇಕಕ್ಕೆ | 108—00 |
| ದೇವಸ್ಥಾನದೊಳಗೆ ಬೆಳ್ಳಿ ಪಾಲಕಿ ಉತ್ಸವ | 208—00 |
| ರಂಗಪೂಜೆ (48 ಎಡೆ) | 250—00 |
| ,, (120 ಎಡೆ) | 300—00 |
| ಬೆಳ್ಳಿ ಲಾಲಕಿ ಉತ್ಸವ ದೀಪೋತ್ಸವ ಸಹಿತ | 408—00 |

| | ರೂ. ನ.ಪೈಸೆ |
|---|---|
| ಬೆಳ್ಳಿ ನಂದಿ ಲಾಲಕಿ ಉತ್ಸವ ದೀಪೋತ್ಸವ ಸಹಿತ | 150—00 |
| ಬೆಳ್ಳಿ ಪಾಲಕಿ ಮತ್ತು ಬೆಳ್ಳಿ ಲಾಲಕಿ ಉತ್ಸವ. ದೀಪೋತ್ಸವ, ಉದ್ಯಾನವನ ದೀಪೋತ್ಸವ ಪೂಜೆ ಇತ್ಯಾದಿ | 750—00 |
| ಬೆಳ್ಳಿ ರಥದಲ್ಲಿ ಶ್ರೀ ಸ್ವಾಮಿಗೆ ಉತ್ಸವ (ಸೋಮವಾರ ಮಾತ್ರ) | 500—00 |
| ನಿತ್ಯಸೇವೆಗಳೊಂದಿಗೆ 108 ಜನ ಬ್ರಾಹ್ಮಣ ಸಂತರ್ಪಣೆ, ದಕ್ಷಿಣೆ, ರಂಗಪೂಜೆ, ದೀಪೋತ್ಸವ, ಬೆಳ್ಳಿ ಪಾಲಕಿಯಲ್ಲಿ ಉತ್ಸವ, ಉದ್ಯಾನವನದಲ್ಲಿ ಪೂಜೆ ಕೂಡಾ | 1025—00 |
| ಬೆಳ್ಳಿ ಮಂಟಪ ರಥದಲ್ಲಿ ಶ್ರೀ ಸ್ವಾಮಿಯ ವಿಹಾರೋತ್ಸವ, ವಸವಂತ ಪೂಜೆ, 108 ಜನ ಬ್ರಾಹ್ಮಣ ಸಂತರ್ಪಣೆ, ದೀಪೋತ್ಸವ ಕೂಡಾ | 2000—00 |

## ಶ್ರೀ ಅಮ್ಮನವರಲ್ಲಿ

ಪವಮಾನಾಭಿಷೇಕ ರೂ. 108, ರಂಗಪೂಜೆ (24 ಎಡೆ) ರೂ. 100 ರಂಗಪೂಜೆ (48 ಎಡೆ) ರೂ. 250, ರಂಗಪೂಜೆ (120 ಎಡೆ) ರೂ. 300.

## ಶ್ರೀ ಗಣಪತಿ ದೇವರಲ್ಲಿ

ಮೂಡಪ್ಪ ಪೂಜೆ ರೂ. 220, ರಂಗಪೂಜೆ (24 ಎಡೆ) ರೂ. 100, ರಂಗಪೂಜೆ (48 ಎಡೆ) ರೂ. 250, ರಂಗಪೂಜೆ (120 ಎಡೆ) ರೂ. 300.

## ಬಸ್ತಿ ಶ್ರೀ ಚಂದ್ರನಾಥ ಸ್ವಾಮಿಗೆ

| | |
|---|---|
| ಪಂಚಾಮೃತಾಭಿಷೇಕ | 6—00 |
| ಕ್ಷೀರಾಭಿಷೇಕ | 3—00 |
| 24 ಕಲಶಾಭಿಷೇಕ, ಪೂಜೆ, ದೀಪಾರಾಧನೆಗೆ ಕೂಡ | 100—50 |
| ಅಮ್ಮನವರಲ್ಲಿ ಪೂಜೆ | 6—00 |

---

## ದೇವಸ್ಥಾನದಲ್ಲಿ ತುಲಾಭಾರ ಹರಿಕೆಗೆ

ತೀಯಾಳದಲ್ಲಿ ರೂ. 100, ಅಕ್ಕಿಯಲ್ಲಿ ರೂ. 100, ಅಕ್ಕಿ ತೆಂಗಿನ ಕ್ಕಾಯಲ್ಲಿ ರೂ. 150, ಬೆಲ್ಲದಲ್ಲಿ ರೂ. 200, ಸಕ್ಕರೆಯಲ್ಲಿ ರೂ. 250, ತೆಂಗಿನಕ್ಕಾಯಲ್ಲಿ ರೂ. 150, ತುಪ್ಪದಲ್ಲಿ ರೂ. 250, ಶ್ರೀಗಂಧದಲ್ಲಿ ರೂ. 300, ಹಣ ರೊಕ್ಕದಲ್ಲಿ ರೂ. 500, ತಾಮ್ರದಲ್ಲಿ ರೂ. 300, ಬೆಳ್ಳಿಯಲ್ಲಿ ರೂ. 1000, ಬೆಳ್ಳಿ ಮತ್ತು ಚಿನ್ನದಲ್ಲಿ ರೂ. 2000, ಹೂವಿನಲ್ಲಿ ರೂ. 250, ಚಿನ್ನದಲ್ಲಿ ರೂ. 5000, ಬಾಳೆ ಹಣ್ಣಿನಲ್ಲಿ ರೂ. 200, ಇತರ ಧಾನ್ಯಗಳಲ್ಲಿ (ನವಧಾನ್ಯಗಳಲ್ಲಿ ಯಾವದಾದ್ರೊಂದಕ್ಕೆ) ರೂ. 150, ವಿವಿಧ ದವಸಗಳಲ್ಲಿ ಬೆಲ್ಲ, ಅಕ್ಕಿ, ತೆಂಗಿನಕ್ಕಾ ವಗೈರೆ ಒಟ್ಟಿಗೆ ರೂ. 300,

ಆಣೆ ಮಾತು, ಕುಡಿ ಮಾತು; ಪ್ರಮಾಣ ವಾಕ್ಯ ತೀರ್ಮಾನಕ್ಕೆ ರೂ. 10, 20, 40, 50, 100 ಪ್ರಕಾರ ಕಾಣಿಕೆ ಕೊಡಬೇಕಾಗುವುದು.

ಕೋರ್ಟ್ ವ ಪಂಚಾಯ್ತಿ ಆಫೀಸ್ ವೊದಲಾದ ಸಂಸ್ಥೆಗಳ ಮೂಲಕ ಮಾಡಿಸತಕ್ಕ ಪ್ರಮಾಣ ಕಾಣಿಕೆ ರೂಪ್ಯಾ 24.

Dharmastal. **D. Ratnavarma Heggade.**